


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1788 (2027)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಸ್.ನಾಗರಾಜ್(ಸಂದೇಶ್‌ನಾಗರಾಜ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಕಂದಾಯ ಸಚಿವರು

ವಿಷಯ : ಹನೂರು ಮಿನಿ ವಿಧಾನಸೌಧ ನಿರ್ಮಾಣ ಮತ್ತು ಚಾಮರಾಜನಗರ ಜಿಲ್ಲೆಯಲ್ಲಿ ಹೊಸ ಉಪ ವಿಭಾಗ ಪ್ರಾರಂಭಿಸುವ ಬಗ್ಗೆ

(ಅ) ಹನೂರು ತಾಲ್ಲೂಕಿನಲ್ಲಿ ತಾಲ್ಲೂಕು ಆಡಳಿತವನ್ನು ಸುಗಮಗೊಳಿಸಲು ತಾಲ್ಲೂಕು ಮಟ್ಟದ ಎಲ್ಲಾ ಕಛೇರಿಗಳೂ ಒಂದೆಡೆ ಇರುವಂತೆ, ಮಿನಿ ವಿಧಾನಸೌಧ ನಿರ್ಮಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆಯೇ ;

(ಆ) ಈ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ದೊರಕಿದೆಯೇ; ಮಿನಿ ವಿಧಾನಸೌಧ ನಿರ್ಮಾಣದ ಅಂದಾಜು ವೆಚ್ಚ ಎಷ್ಟು; ಯಾವ ಕಾಲಮಿತಿಯಲ್ಲಿ ಈ ಮಿನಿ ವಿಧಾನಸೌಧ ನಿರ್ಮಾಣ ಕಾಮಗಾರಿಯನ್ನು ಆರಂಭಿಸಲಾಗುವುದು ;

(ಇ) ಚಾಮರಾಜನಗರ ಜಿಲ್ಲೆಯಲ್ಲಿ ಒಂದೇ ರೆವಿನ್ಯೂ ಉಪವಿಭಾಗವಿದ್ದು, ಸಾರ್ವಜನಿಕ ಆಡಳಿತದ ಹಿತದೃಷ್ಟಿಯಿಂದ ಚಾಮರಾಜನಗರದಲ್ಲಿ ಇನ್ನೊಂದು ಉಪವಿಭಾಗವನ್ನು ರಚಿಸಲು ಕ್ರಮ ತೆಗೆದುಕೊಳ್ಳಲಾಗುವುದೇ ?